# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** | 1965 |
| **ಸದಸ್ಯರ ಹೆಸರು** | ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು) |
| **ಉತ್ತರಿಸಬೇಕಾದ ದಿನಾಂಕ** | 16.03.2022 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಕೆ.ಆರ್.ಐ.ಡಿ.ಎಲ್. ವತಿಯಿಂದ ಕೈಗೊಳ್ಳಲಾದ ಕಾಮಗಾರಿಗಳ ಕುರಿತು ಹಲವಾರು ಅಕ್ರಮ, ವಂಚನೆ, ಭ್ರಷ್ಟಾಚಾರ ಹಾಗೂ ನಕಲು ಬಿಲ್ ಪಾವತಿ ಬಗ್ಗೆ ದೂರು / ಆರೋಪಗಳು ಕೇಳಿ ಬಂದಿರುವುದು ನಿಜವೇ; | ಕೆ.ಆರ್.ಐ.ಡಿ.ಎಲ್. ವತಿಯಿಂದ ಕೈಗೊಳ್ಳಲಾದ ಕೆಲವು ಕಾಮಗಾರಿಗಳ ಅನುಷ್ಠಾನದಲ್ಲಿ ಲೋಪವಾಗಿರುವ ಬಗ್ಗೆ ಸರ್ಕಾರಕ್ಕೆ ದೂರುಗಳು ಬಂದಿರುತ್ತವೆ. |
| ಆ. | ಹಾಗಿದ್ದಲ್ಲಿ, ಕಳೆದ 3 ವರ್ಷಗಳ ಹಗರಣ ವಿವರಗಳನ್ನು ನೀಡುವುದು; | ದೂರುಗಳಿಗೆ ಸಂಬಂಧಿಸಿದಂತೆ 3 ವರ್ಷಗಳ ವಿವರಗಳನ್ನು ಅನುಬಂಧ "ಅ" ನಲ್ಲಿ ನೀಡಿದೆ. |
| ಇ. | ಎಷ್ಟು ಪ್ರಕರಣಗಳಲ್ಲಿ ಆರೋಪಗಳು ಸಾಭೀತಾಗಿ ಸಂಬಂಧಿಸಿದ ಸಿಬ್ಬಂದಿ / ಅಧಿಕಾರಿಗಳ ಮೇಲೆ ಕ್ರಮ ಜರುಗಿಸಲಾಗಿದೆ? (ವಿವರ ಒದಗಿಸುವುದು) | ಕರ್ನಾಟಕ ಲೋಕಾಯುಕ್ತದಿಂದ ಕೆಲವು ಪ್ರಕರಣಗಳಲ್ಲಿ ನೀಡಿರುವ ಶಿಫಾರಸ್ಸಿನಂತೆ ದಂಡನಾದೇಶಗಳನ್ನು ಹೊರಡಿಸಲಾಗಿರುತ್ತದೆ. ಮುಂದುವರೆದು, ಇಲಾಖಾ ವಿಚಾರಣೆ ನಡೆದು ಆರೋಪಗಳು ಸಾಭೀತಾದ ಪ್ರಕರಣಗಳಲ್ಲಿಯೂ ಸಹ ಆರೋಪಿತ ಅಧಿಕಾರಿಗಳ ವಿರುದ್ಧ ದಂಡನಾದೇಶಗಳನ್ನು ಹೊರಡಿಸಲಾಗಿರುತ್ತದೆ. ವಿವರಗಳನ್ನು ಅನುಬಂಧ "ಅ" ನಲ್ಲಿ ನೀಡಿದೆ. |

ಸಂಖ್ಯೆ: ಗ್ರಾಅಪ:15ನೇವಿಸ:200/75:ಆರ್.ಆರ್.ಸಿ:2021

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

## ವಿಧಾನ ಪರಿಷತ್ತಿನ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 247 (1965)

## ಪ್ರಶ್ನೆ ಕೇಳಿರುವವರ ಹೆಸರು ಶ್ರೀ ಯು.ಬಿ.ವೆಂಕಟೇಶ್
## (ನಾಮ ನಿರ್ದೇಶನ ಹೊಂದಿದವರು)

**ಅನುಬಂಧ–'ಅ'**

| ಕ್ರ. ಸಂ. | ಆರೋಪದ ವಿವರ | ಕೈಗೊಂಡ ಕ್ರಮ |
|---|---|---|
| 1 | ಕೆಆರ್‌ಐಡಿಎಲ್ ಸಂಸ್ಥೆಯಿಂದ ರೂ.55.00 ಕೋಟಿ ಹಣವನ್ನು ಮಂಗಳೂರಿನ ಇಂಡಿಯನ್ ಓಯಸೀಸ್ ಬ್ಯಾಂಕ್, ಕುಳಾಯಿ ಶಾಖೆಯಲ್ಲಿ ನಿಗಧಿತ ಠೇವಣಿಯಾಗಿ ಇರಿಸಿದ್ದು, ಸದರಿ ಬಾಬ್ತನ್ನು ಬ್ಯಾಂಕಿನ ಸಿಬ್ಬಂದಿಗಳು ಇತರರೊಂದಿಗೆ ಶಾಮೀಲಾಗಿ, ದುರುಪಯೋಗ ಪಡಿಸಿಕೊಂಡಿರುವ ಕುರಿತು. | ಕೆಆರ್‌ಐಡಿಎಲ್ ಸಂಸ್ಥೆಯಿಂದ ಮಂಗಳೂರಿನ ಇಂಡಿಯನ್ ಓಯಸೀಸ್ ಬ್ಯಾಂಕ್, ಕುಳಾಯಿ ಶಾಖೆಯಲ್ಲಿ ನಿಗಧಿತ ಠೇವಣಿಯಾಗಿ ರೂ.55.00 ಕೋಟಿ ಹಣವನ್ನು ಇರಿಸಿದ್ದು, ಸದರಿ ಬಾಬ್ತನ್ನು ಬ್ಯಾಂಕಿನ ಸಿಬ್ಬಂದಿಗಳು ಇತರರೊಂದಿಗೆ ಶಾಮೀಲಾಗಿ, ದುರುಪಯೋಗ ಪಡಿಸಿಕೊಂಡಿದ್ದರು. ಸದರಿ ಮೊತ್ತವನ್ನು ಕರ್ನಾಟಕ ಸರ್ಕಾರದ ಹಾಗೂ ಸಂಸ್ಥೆಯ ಪರಿಶ್ರಮದಿಂದ ದಿನಾಂಕ 28-02-2022 ರಂದು ಹಿಂಪಡೆಯಲು ಸಾಧ್ಯವಾಗಿದ್ದು, ಹಣ ಹಿಂತಿರುಗಿ ಬಂದಿರುತ್ತದೆ. |
| 2 | ಮಾನ್ಯಶ್ರೀ.ಎ. ನಾರಾಯಣಸ್ವಾಮಿ, Minister of State for Social Justice and Empowerment, Government of India ಇವರು ಆನೇಕಲ್ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ 2018-19 ರಿಂದ 2020-21ನೇ ಸಾಲಿನವರೆವಿಗೆ ಕೈಗೊಂಡ ವಿವಿಧ ಇಲಾಖೆಯ ಹಲವು ಯೋಜನೆಯಡಿಯಲ್ಲಿ ಮೂಲಭೂತ ಸೌಕರ್ಯಗಳಾದ ಸಿ.ಸಿ. ರಸ್ತೆ, ಚರಂಡಿ, ಡಾಂಬರೀಕರಣ, ಸ್ಮಶಾನ ಅಭಿವೃದ್ಧಿ ಹಾಗೂ ವಿವಿಧ ಕಾಮಗಾರಿಗಳನ್ನು ಕೈಗೊಂಡಿದ್ದು, ಸದರಿ ಕಾಮಗಾರಿಗಳ ಪ್ರಾರಂಭಿಸುವ ಸಮಯದಲ್ಲಿ ಅನುಸರಿಸಬೇಕಾದ ತಾಂತ್ರಿಕ ಕ್ರಮಗಳನ್ನು ಅನುಸರಿಸದೇ ಕಳಪೆ ಕಾಮಗಾರಿಗಳನ್ನು ಕೈಗೊಳ್ಳಲಾಗಿರುವುದಾಗಿಯೂ, ಗುತ್ತಿಗೆದಾರರು ಹಾಗೂ ಅಧಿಕಾರಿಗಳಗೊಂಡಂತೆ ಕಾಮಗಾರಿಗಳ ಹೆಸರುಗಳನ್ನು ಪುನರಾವರ್ತನೆ ಮಾಡಿ, ಒಂದೇ ಕಾಮಗಾರಿಗಳಿಗೆ ಬೇರೆ ಬೇರೆ ಇಲಾಖೆಗಳಡಿಯಲ್ಲಿ ಅನುದಾನವನ್ನು ಪಡೆದು, ಸರ್ಕಾರದ ಹಣವನ್ನು ದುರ್ಬಳಕೆ ಮಾಡಿರುವುದಾಗಿಯೂ, ಅದರಲ್ಲೂ ಚಿಕ್ಕನಹಳ್ಳಿ ಶ್ರೀನಿವಾಸ್ ಎಂಬ ಗುತ್ತಿಗೆದಾರನ ಜೊತೆಗೆ ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಡ್‌ನ ಹಲವು ಸಿಬ್ಬಂದಿಗಳು ಬೇರೆ ಇಲಾಖೆ ಅಡಿಯಲ್ಲಿ ನಿರ್ವಹಿಸಿರುವ ಕಾಮಗಾರಿಗಳಿಗೆ ಮತ್ತೊಂದು ಇಲಾಖೆಯ ಕಾಮಗಾರಿ ಅನುದಾನ ಪಡೆದು, ದುರ್ಬಳಕೆ ಮಾಡಿರುವ ಬಗ್ಗೆ ಹಲವು ಆರೋಪಗಳು ಸಹ ಬಂದಿದ್ದು, ಕೂಡಲೇ ತಾಂತ್ರಿಕ ಸಮಿತಿಯೊಂದನ್ನು ರಚಿಸಿ, ಸೂಕ್ತ ಕ್ರಮ ಕೈಗೊಳ್ಳಲು ಕೋರಿರುವ ಕುರಿತು. | ಮಾನ್ಯ ಸಚಿವರ ದೂರಿನನ್ವಯ ಆನೇಕಲ್ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ 2018-19 ರಿಂದ 2020-21ನೇ ಸಾಲಿನವರೆವಿಗೆ ಕೈಗೊಂಡ ವಿವಿಧ ಇಲಾಖೆಯ ಹಲವು ಯೋಜನೆಯಡಿಯಲ್ಲಿನ ಮೂಲಭೂತ ಸೌಕರ್ಯಗಳಾದ ಸಿ.ಸಿ. ರಸ್ತೆ, ಚರಂಡಿ, ಡಾಂಬರೀಕರಣ, ಸ್ಮಶಾನ ಅಭಿವೃದ್ಧಿ ಹಾಗೂ ವಿವಿಧ ಕಾಮಗಾರಿಗಳನ್ನು ಪ್ರಾರಂಭಿಸುವ ಸಮಯದಲ್ಲಿ ಅನುಸರಿಸಬೇಕಾದ ತಾಂತ್ರಿಕ ಕ್ರಮಗಳನ್ನು ಅನುಸರಿಸದೇ ಕಳಪೆ ಕಾಮಗಾರಿಗಳನ್ನು ಕೈಗೊಳ್ಳಲಾಗಿರುವ ಹಾಗೂ ಗುತ್ತಿಗೆದಾರರು ಹಾಗೂ ಅಧಿಕಾರಿಗಳಗೊಂಡಂತೆ ಕಾಮಗಾರಿಗಳ ಹೆಸರುಗಳನ್ನು ಪುನರಾವರ್ತನೆ ಮಾಡಿ, ಒಂದೇ ಕಾಮಗಾರಿಗಳಿಗೆ ಬೇರೆ ಬೇರೆ ಇಲಾಖೆಗಳಡಿಯಲ್ಲಿ ಅನುದಾನವನ್ನು ಪಡೆದು, ಸರ್ಕಾರದ ಹಣವನ್ನು ದುರ್ಬಳಕೆ ಮಾಡಿಕೊಂಡಿರುವ ಕುರಿತು ತನಿಖೆಯನ್ನು ನಡೆಸಿ, ವರದಿಯನ್ನು ಸಲ್ಲಿಸಲು ದಿನಾಂಕ 15-12-2021 ರಂದು ಸಮಿತಿಯೊಂದನ್ನು ರಚಿಸಲಾಗಿದ್ದು, ಸದರಿ ಸಮಿತಿಯ ವರದಿಯ ನಿರೀಕ್ಷಣೆಯಲ್ಲಿದೆ. |

| ಕ್ರ. ಸಂ. | ಆರೋಪದ ವಿವರ | ಕೈಗೊಂಡ ಕ್ರಮ |
|---|---|---|
| 3 | ಕಲಬುರಗಿ ನಗರದಲ್ಲಿನ ಅಬ್ದುಲ್ ನಜೀರ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ಪ್ರಾದೇಶಿಕ ತರಬೇತಿ ಕೇಂದ್ರ ಕಟ್ಟಡ ಹಾಗೂ ಜಿಲ್ಲಾ ಪಂಚಾಯತ್ ಸಂಪನ್ಮೂಲ ಕೇಂದ್ರ ಕಟ್ಟಡಗಳ ಕಾಮಗಾರಿ ಕುರಿತು | ಕಲಬುರಗಿ ನಗರದಲ್ಲಿನ ಅಬ್ದುಲ್ ನಜೀರ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ಪ್ರಾದೇಶಿಕ ತರಬೇತಿ ಕೇಂದ್ರ ಕಟ್ಟಡ ಹಾಗೂ ಜಿಲ್ಲಾ ಪಂಚಾಯತ್ ಸಂಪನ್ಮೂಲ ಕೇಂದ್ರ ಕಟ್ಟಡಗಳ ಕಳಪೆ ಕಾಮಗಾರಿಗಳ ಕುರಿತು ವರದಿ ಬಂದಿದ್ದು, ಈ ಸಂಬಂಧ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಕ್ರಮವಹಿಸಲಾಗಿರುತ್ತದೆ. ಮುಂದುವರೆದು, ಕಳಪೆ ಕಾಮಗಾರಿಗಳನ್ನು ಸರಿಪಡಿಸಲು ಕ್ರಮವಹಿಸಿದ್ದು, ಇದಕ್ಕಾಗುವ ವೆಚ್ಚವನ್ನು ಕೂಡಾ ಸಂಬಂಧಿಸಿದ ಅಧಿಕಾರಿಗಳಿಂದ ವಸೂಲಿ ಮಾಡಲು ಕ್ರಮವಹಿಸಲಾಗುವುದು. |
| 4 | ಕೋಲಾರ, ಕಲಬುರಗಿ ಉಪ ವಿಭಾಗಗಳ ಕಾಮಗಾರಿಗಳ ನಿರ್ವಹಣೆಯಲ್ಲಿ ಅಕ್ರಮ ನಡೆದಿದೆ ಎಂದು ಬಂದಿರುವ ದೂರು ಕುರಿತು. | ಅಕ್ರಮಗಳ ಕುರಿತು ಪಂಚನಾಮ ಸಮಿತಿ ರಚಿಸಿದ್ದು, ಸದರಿ ಸಮಿತಿಯು ಸಲ್ಲಿಸಿದ ವರದಿಯ ಮೇಲೆ ಸಂಬಂಧಿಸಿದ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಗಿದೆ. |
| 5 | ಸಂಸ್ಥೆಯ ಮಂಡ್ಯ ಉಪ ವಿಭಾಗದ ದಾಸ್ತಾನಿನಲ್ಲಿ ಸಿಮೆಂಟ್ ಹಾಗೂ ಸ್ಟೀಲ್ ಕೊರತೆ ಬಂದಿರುವ ದೂರು ಕುರಿತು | ಪ್ರಕರಣಕ್ಕೆ ಸಂಬಂಧಿಸಿದಂತೆ ಭಾಗಿಯಾಗಿರುವ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಿದ್ದು, ವಿಚಾರಣೆಯು ಪ್ರಗತಿಯಲ್ಲಿರುತ್ತದೆ. |
| 6 | ಕಲಬುರಗಿ ಜಿಲ್ಲೆಯಡಿಯ ನದಿಗಳಿಂದ ಮರಳನ್ನು ತೆಗೆದು ಸರ್ಕಾರಿ ಕಾಮಗಾರಿಗಳಿಗೆ ಬಳಸಲು ಮಂಜೂರಾಗಿದ್ದು, ಸದರಿ ಮರಳಿನ ಅಕ್ರಮ ಗಣಿಕಾರಿಕೆ ನಡೆಸಿರುತ್ತಾರೆಂಬ ದೂರು ಕುರಿತು | ಬಂದಂತಹ ದೂರಿಗೆ ಸಂಬಂಧಿಸಿದಂತೆ ಆಪಾದಿತ ಅಧಿಕಾರಿ/ ಸಿಬ್ಬಂದಿಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಿದ್ದು, ವಿಚಾರಣಾಧಿಕಾರಿಗಳ ಶಿಫಾರಸ್ಸಿನಂತೆ ಆಪಾದಿತ ಸಿಬ್ಬಂದಿಗೆ ದಂಡನಾದೇಶವನ್ನು ಹೊರಡಿಸಲಾಗಿರುತ್ತದೆ. |

| ಕ್ರ. ಸಂ. | ಆರೋಪದ ವಿವರ | ಕೈಗೊಂಡ ಕ್ರಮ |
|---|---|---|
| 7 | ಸಂಸ್ಥೆಯ ರಾಯಚೂರು ವಿಭಾಗದಡಿಯಲ್ಲಿನ ಕಾಮಗಾರಿಗಳನ್ನು ಅರ್ಧಕ್ಕೆ ನಿಲ್ಲಿಸಿ, ಆರ್ಥಿಕ ಅವ್ಯವಹಾರ, ಕಳಪೆ ಕಾಮಗಾರಿ ನಡೆಸಿರುತ್ತಾರೆಂದು ರಾಯಚೂರು ಜಿಲ್ಲೆಯ ಚುನಾಯಿತ ಸದಸ್ಯರು ದೂರಿದ್ದು, ಸದರಿ ದೂರಿನ್ನು ಕುರಿತು. | ಸಂಸ್ಥೆಯ ರಾಯಚೂರು ವಿಭಾಗದಡಿಯಲ್ಲಿನ ಕಾಮಗಾರಿಗಳನ್ನು ಅರ್ಧಕ್ಕೆ ನಿಲ್ಲಿಸಿ, ಆರ್ಥಿಕ ಅವ್ಯವಹಾರ, ಕಳಪೆ ಕಾಮಗಾರಿ ನಡೆಸಿರುತ್ತಾರೆಂದು ರಾಯಚೂರು ಜಿಲ್ಲೆಯ ಚುನಾಯಿತ ಸದಸ್ಯರು ದೂರಿದ್ದು, ಈ ಸಂಬಂಧ ಸಕಾರದಿಂದ ನಿವೃತ್ತ ನ್ಯಾಯಾಧೀಶರಿಂದ ವಿಚಾರಣೆಯನ್ನು ನಡೆಸಲು ಆದೇಶಿಸಲಾಗಿತ್ತು. ಅದರಂತೆ ವಿಚಾರಣೆಯನ್ನು ನಡೆಸುತ್ತಿರಲಾಗಿ, ಆಪಾದಿತ ಅಧಿಕಾರಿಗಳಲ್ಲಿ ಕೆಲವರು ಮಾನ್ಯ ನ್ಯಾಯಾಲಯದಿಂದ ವಿಚಾರಣೆಗೆ ತಡೆಯಾಜ್ಞೆಗಳನ್ನು ತಂದಿದ್ದರು. ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆ ನಡೆಸಿದ ಮಾನ್ಯ ನ್ಯಾಯಾಲಯವು ಸರ್ಕಾರವು ವಿಚಾರಣೆಗಾಗಿ ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿರುವುದನ್ನು ರದ್ದುಗೊಳಿಸಿ, ತಡೆಯಾಜ್ಞೆಗಳನ್ನು ತೆರವುಗೊಳಿಸಿ, ಸಂಸ್ಥೆಯು ಇಲಾಖಾ ವಿಚಾರಣೆಯನ್ನು ನಡೆಸಬಹುದೆಂದು ತೀರ್ಪನ್ನು ನೀಡಿತ್ತು. ಅದರಂತೆ ಸಂಸ್ಥೆಯಿಂದ ನಿವೃತ್ತ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿ, ವಿಚಾರಣೆಯನ್ನು ನಡೆಸಲಾಗುತ್ತಿರುತ್ತದೆ. |
| 8 | 2007ನೇ ಸಾಲಿನಲ್ಲಿ ರಾಯಚೂರು ಜಿಲ್ಲೆಯಲ್ಲಿ ಸಣ್ಣ ನೀರಾವರಿ, ಕೆರೆ ಪುನಶ್ಚೇತನ ಕಾಮಗಾರಿಗಳ ಅನುಷ್ಠಾನ, ದೇವದುರ್ಗ ತಾಲ್ಲೂಕು ಜಿನ್ನಾಪುರ ಕೆರೆ ಹಾಗೂ ಗಲಗಾ ಗ್ರಾಮದ ಕೆರೆ ಅಭಿವೃದ್ಧಿಪಡಿಸುವ ಕುರಿತು. | ಮಾನ್ಯ ಲೋಕಾಯುಕ್ತ ಪ್ರಾಧಿಕಾರವು ಕಾಮಗಾರಿಯನ್ನು ನಿರ್ವಹಿಸದೇ ಸುಳ್ಳು ಲೆಕ್ಕಪತ್ರ ಸಲ್ಲಿಸಿರುವುದು ಕಂಡುಬಂದಿರುವುದಾಗಿ ವರದಿ ಮಾಡಿ ಸಂಬಂಧಿಸಿದ ಅಧಿಕಾರಿಯವರಿಂದ ರೂ.75.00 ಲಕ್ಷಗಳನ್ನು ವಸೂಲಿ ಮಾಡಲು ಶಿಫಾರಸ್ಸು ಮಾಡಿದ್ದು, ಅದರಂತೆ ದಂಡನಾದೇಶವನ್ನು ಹೊರಡಿಸಲಾಗಿರುತ್ತದೆ. |
| 9 | ರಾಮನಗರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಹೆಬ್ಬಳಲು ಗ್ರಾಮದ ಹೆಬ್ಬಳಲು ಗ್ರಾಮ, ಸುಟ್ಟಕ್ಕಿಪಾಳ್ಯದ ಗ್ರಾಮದ ಮಾರ್ಗವಾಗಿ ಮುಳ್ಳಕಟ್ಟಮ್ಮ ದೇವಸ್ಥಾನದವರೆಗಿನ 2.60 ಕಿ.ಮೀ. ಉದ್ದದ ರಸ್ತೆ ಹಾಗೂ 5.0 ಮೀ ಉದ್ದದ ಚರಂಡಿ ಕಾಮಗಾರಿಯಲ್ಲಿನ ಅಕ್ರಮ ಕುರಿತು. | ಕರ್ನಾಟಕ ಲೋಕಾಯುಕ್ತ ಇಲಾಖೆಗೆ ಬಂದಂತಹ ದೂರನ್ನು ಆಧರಿಸಿ ಸಂಬಂಧಿಸಿದಂತೆ ಆಪಾದಿತ ಅಧಿಕಾರಿ/ ಸಿಬ್ಬಂದಿಗಳ ವಿರುದ್ಧ ಹಣ ವಸೂಲಾತಿಗೆ ಶಿಫಾರಸ್ಸು ಮಾಡಿದ್ದು, ಅದರಂತೆ ಆಪಾದಿತ ಅಧಿಕಾರಿ/ ಸಿಬ್ಬಂದಿಗಳಿಗೆ ದಂಡನಾದೇಶವನ್ನು ಹೊರಡಿಸಲಾಗಿರುತ್ತದೆ. |

| ಕ್ರ. ಸಂ. | ಆರೋಪದ ವಿವರ | ಕೈಗೊಂಡ ಕ್ರಮ |
|---|---|---|
| 10 | ಬಿಬಿಎಂಪಿಯಡಿಯ ರಾಜರಾಜೇಶ್ವರಿ ನಗರ ಕ್ಷೇತ್ರದಲ್ಲಿ 114 ಕಾಮಗಾರಿಗಳನ್ನು ನಿರ್ವಹಿಸದೇ ರೂ.118.26 ಕೋಟಿಗಳಷ್ಟು ಅಕ್ರಮ ನಡೆಸಿರುತ್ತಾರೆಂದು ಮಾನ್ಯ ಲೋಕಾಯುಕ್ತರು ಸರ್ಕಾರಕ್ಕೆ ನೀಡಿರುವ ಶಿಫಾರಸ್ಸು ಕುರಿತು. | ಮಾನ್ಯ ಲೋಕಾಯುಕ್ತರು ದಿನಾಂಕ 28-02-2022 ರಂದು ಸರ್ಕಾರಕ್ಕೆ ಸಲ್ಲಿಸಿರುವ ವರದಿಯಲ್ಲಿ ಬಿಬಿಎಂಪಿಯಡಿಯ ರಾಜರಾಜೇಶ್ವರಿ ನಗರ ಕ್ಷೇತ್ರದಲ್ಲಿ 114 ಕಾಮಗಾರಿಗಳನ್ನು ನಿರ್ವಹಿಸದೇ ಕೆ.ಆರ್.ಐ.ಡಿ.ಎಲ್. ಸಂಸ್ಥೆಯೊಂದಿಗೆ ಬಿ.ಬಿ.ಎಂ.ಪಿಯ ಅಧಿಕಾರಿಗಳು ಆರ್ಥಿಕ ಅವ್ಯವಹಾರ ನಡೆಸಿರುತ್ತಾರೆಂದು ವರದಿ ಸಲ್ಲಿಸಿದ್ದರು. ಈ ಸಂಬಂಧ ಪೂರ್ಣ ವಿವರಗಳನ್ನು ಸರ್ಕಾರದಿಂದ ಪಡೆಯಲು ಕ್ರಮ ವಹಿಸಲಾಗಿದ್ದು, ವಿವರಗಳನ್ನು ಪಡೆದು, ಸಂಸ್ಥೆಯ ಸಂಬಂಧಿಸಿದ ಅಧಿಕಾರಿ/ಸಿಬ್ಬಂದಿಯು ವಿರುದ್ಧ ನಿಯಮಾನುಸಾರ ಶಿಸ್ತು ಕ್ರಮ ಜರಿಗಿಸಲು ಕ್ರಮ ವಹಿಸಲಾಗಿರುತ್ತದೆ. |
| 11 | ಶ್ರೀ.ಸಿ.ಕೆ. ಕಿರಣ್ ಕುಮಾರ್, ಬೆಂಗಳೂರು ನಿವಾಸಿ ರವರು ಬೆಂಗಳೂರು ದಕ್ಷಿಣ ತಾಲ್ಲೂಕು ಕೆ. ಗೊಲ್ಲಹಳ್ಳಿ ಗ್ರಾಮ ಪಂಚಾಯತಿ ವ್ಯಾಪ್ತಿಯ ಗೋಣಿಪುರ ಗ್ರಾಮದ ಸರ್ವೇ ನಂ.63/1ಎ ಪೈಕಿ ಗ್ರಾಮ ಠಾಣಾ ವ್ಯಾಪ್ತಿಯಲ್ಲಿನ ಸ್ವತ್ತಿನ ಸಂ:171 ಖಾಸಗಿ ಸ್ವತ್ತಾಗಿದ್ದು, ಸದರಿ ಸ್ವತ್ತಿನಲ್ಲಿ ಕೆಆರ್ಐಡಿಎಲ್ ಸಂಸ್ಥೆಯು ಬಸವೇರ್ಶವರ ಸಮುದಾಯ ಭವನ ನಿರ್ಮಾಣ ಕಾಮಾಗಾರಿಯನ್ನು ಅಕ್ರಮವಾಗಿ ನಿರ್ಮಿಸಿರುತ್ತದೆ ಎಂಬ ದೂರು ಕುರಿತು. | ಬಂದಂತಹ ದೂರನ್ನು ಆಧರಿಸಿ, ಸಂಬಂಧಿಸಿದ ಸಿಬ್ಬಂದಿಗಳಿಗೆ ಕಾರಣ ಕೇಳುವ ನೋಟೀಸ್ಸನ್ನು ಜಾರಿ ಮಾಡಲಾಗಿರುತ್ತದೆ. ಮುಂದುವರೆದು, ಸದರಿ ಸ್ವತ್ತಿನ ಮಾಲೀಕರಾದ ಶ್ರೀ.ಆರ್. ಲಕ್ಷ್ಮಯ್ಯರವರು ವೈಯಕ್ತಿಕ ಕಾರಣಗಳಿಂದ ಹಾಲಿ ಸದರಿ ಸ್ವತ್ತನ್ನು ಬಸವೇಶ್ವರ ಸಮುದಾಯ ಭವನ ನಿರ್ಮಾಣ ಕಾಮಗಾರಿಗೆಂದು, ಸರ್ಕಾರದ ಹೆಸರಿಗೇ ನೊಂದಾಯಿಸಿ ನೀಡಿರುತ್ತಾರೆ. |
| 12 | ಜೇವರ್ಗಿ ತಾಲ್ಲೂಕಿನ ಬಿಳವಾರ ಗ್ರಾಮದಲ್ಲಿ ಯುನಾನಿ ಆಸ್ಪತ್ರೆ ಕಟ್ಟಡ ನಿರ್ಮಾಣ ಸಂಬಂಧ ಮುಂಗಡ ಹಣ ಪಡೆದು ಕಾಮಗಾರಿಯನ್ನು ಪ್ರಾರಂಭಿಸಲು ವಿಳಂಭ ಮಾಡಿರುತ್ತಾರೆಂಬ ಆರೋಪ ಕುರಿತು. | ದೂರಿಗೆ ಸಂಬಂಧಿಸಿದಂತೆ ಮಾನ್ಯ ಲೋಕಾಯುಕ್ತ ಪ್ರಾಧಿಕಾರದಿಂದ ಬಂದಂತಹ ಶಿಫಾರಸ್ಸಿನಂತೆ ಆರೋಪಿತ ಅಧಿಕಾರಿಯಾದ ಶ್ರೀ ಹೆಚ್.ಹೆಚ್.ಅವಾರಿ, ನಿವೃತ್ತ ಸಹಾಯಕ ಕಾರ್ಯಪಾಲಕ ಅಭಿಯಂತರರು ಇವರ ನಿವೃತ್ತಿ ನಂತರದ ಸೌಲಭ್ಯಗಳಿಂದ ಶೇ.10% ರಷ್ಟನ್ನು ಕಡಿತಗೊಳಿಸಲು ದಂಡನಾದೇಶವನ್ನು ಹೊರಡಿಸಲಾಗಿದೆ. |

| ಕ್ರ. ಸಂ. | ಆರೋಪದ ವಿವರ | ಕೈಗೊಂಡ ಕ್ರಮ |
|---|---|---|
| 13 | ಸಿಂಧನೂರು ತಾಲ್ಲೂಕಿನಲ್ಲಿ ಮಂಜೂರಾದ ಕಾಮಗಾರಿಯನ್ನು ನಿರ್ವಹಿಸದೇ ಸದರಿ ಅನುದಾನದಲ್ಲಿ ಬೇರೆ ಕಾಮಗಾರಿಗಳನ್ನು ನಿರ್ವಹಿಸಿರುವ ಕುರಿತು | ದೂರಿಗೆ ಸಂಬಂಧಿಸಿದಂತೆ ಮಾನ್ಯ ಲೋಕಾಯುಕ್ತ ಪ್ರಾಧಿಕಾರದಿಂದ ಬಂದಂತಹ ಶಿಫಾರಸ್ಸಿನಂತೆ ಆರೋಪಿತ ಅಧಿಕಾರಿಯಾದ ಶ್ರೀ ಆನಂದ್, ಕಿರಿಯ ಅಭಿಯಂತರರು ಇವರಿಗೆ ನಾಲ್ಕು ವಾರ್ಷಿಕ ವೇತನ ಬಡ್ತಿಗಳನ್ನು ತಡೆಹಿಡಿಯಲು ಹಾಗೂ ಸದರಿಯವರ ಪದೋನ್ನತಿಯನ್ನು ನಾಲ್ಕು ವರ್ಷಗಳ ಕಾಲ ಮುಂದೂಡಿ ದಂಡನಾದೇಶವನ್ನು ಹೊರಡಿಸಲಾಗಿದೆ. |
| 14 | ಬಾಗಲಕೋಟೆ ಜಿಲ್ಲೆಯ ಭಗವತಿ ಗ್ರಾಮಕ್ಕೆ 5ನೇ ಹಂತ ಸುವರ್ಣ ಗ್ರಾಮೋದಯ ಯೋಜನೆಯಡಿಯಲ್ಲಿ 35 ಕಾಮಗಾರಿಗಳನ್ನು ನಿರ್ವಹಿಸಲು ಅನುಮೋದನೆಯಾಗಿದ್ದರೂ ಸಂಸ್ಥೆಯಿಂದ ಕೇವಲ 13 ಕಾಮಗಾರಿಗಳನ್ನು ಮಾತ್ರ ನಿರ್ವಹಿಸಿರುವುದಾಗಿ ಬಂದಿರುವ ಆಪಾದನೆ ಕುರಿತು | ದೂರಿಗೆ ಸಂಬಂಧಿಸಿದಂತೆ ಮಾನ್ಯ ಲೋಕಾಯುಕ್ತ ಪ್ರಾಧಿಕಾರದಿಂದ ಬಂದಂತಹ ಶಿಫಾರಸ್ಸಿನಂತೆ ಆರೋಪಿತ ಅಧಿಕಾರಿಯಾದ ಶ್ರೀ ಆರ್.ಎಫ್.ಗಲಗಲಿ, ಸಹಾಯಕ ಕಾರ್ಯಪಾಲಕ ಅಭಿಯಂತರರು ಇವರ ವೇತನವನ್ನು ಸಂಚಿತ ಪರಿಣಾಮ ಸಹಿತವಾಗಿ ನಾಲ್ಕು ಘಟ್ಟಗಳನ್ನು ಇಳಿಸಿ, ನಿಗಧಿಪಡಿಸಲಾಗಿದೆ ಹಾಗೂ ಸದರಿಯವರ ಪದೋನ್ನತಿಯನ್ನು ಮೂರು ವರ್ಷಗಳ ಕಾಲ ಮುಂದೂಡಿ ದಂಡನಾದೇಶವನ್ನು ಹೊರಡಿಸಲಾಗಿದೆ. |
| 15 | ಸಂಸ್ಥೆಯ ವಿವಿಧ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಹಾಗೂ ನಿರ್ವಹಣೆಗೆ ಕುರಿತಂತೆ ಸಾರ್ವಜನಿಕರಿಂದ ಬಂದಂತಹ ದೂರುಗಳಿಗೆ ಸಂಬಂಧಿಸಿದಂತೆ ಮಾನ್ಯ ಲೋಕಾಯುಕ್ತ ಪ್ರಾಧಿಕಾರವು ಇಲಾಖಾ ವಿಚಾರಣೆಗೆ ಪ್ರಕರಣವನ್ನು ಲೋಕಾಯುಕ್ತ ಸಂಸ್ಥೆಗೆ ವಹಿಸಲು ಕೋರಿರುವ ಕುರಿತು | ಮಾನ್ಯ ಲೋಕಾಯುಕ್ತ ಪ್ರಾಧಿಕಾರವು ಕೆಆರ್ಐಡಿಎಲ್ ಸಂಸ್ಥೆಯ ವಿವಿಧ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಹಾಗೂ ನಿರ್ವಹಣೆಗೆ ಕುರಿತಂತೆ ಸಾರ್ವಜನಿಕರಿಂದ ಬಂದಂತಹ ದೂರುಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ಮಾನ್ಯ ಲೋಕಾಯುಕ್ತ ಪ್ರಾಧಿಕಾರಕ್ಕೆ ವಹಿಸಲು ಕೋರಿರುವಂತೆ ಎಲ್ಲಾ ಪ್ರಕರಣಗಳನ್ನು ವಿಚಾರಣೆಗಾಗಿ ಪ್ರಾಧಿಕಾರಕ್ಕೆ ವಹಿಸಿ ಆದೇಶಿಸಲಾಗಿರುತ್ತದೆ. |

ವ್ಯವಸ್ಥಾಪಕ ನಿರ್ದೇಶಕರು
ಕೆಆರ್ಐಡಿಎಲ್ ಬೆಂಗಳೂರು